# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 105 |
| ಸದಸ್ಯರ ಹೆಸರು | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಂಕ | 09.07.2018 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಾರವಾರ ಜಿಲ್ಲೆಯ ಹಳಿಯಾಳ ತಾಲ್ಲೂಕಿನ ಅಡಿಕೆ ಹೊಸೂರ ಗ್ರಾಮದಲ್ಲಿ ಅಂದಾಜು 3 ಕೋಟಿ ವೆಚ್ಚದಲ್ಲಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಲ್ಲಿ ಅಡಿಕೆ ಹೊಸೂರ ಗ್ರಾಮ ಸಂಪರ್ಕ ಕಲ್ಪಿಸುವ ಯೋಜನೆಗೆ ಅನುದಾನ ಮಂಜೂರು ಮಾಡಿ ಕಾಮಗಾರಿ ಮಾಡಿದ್ದು, ಆ ಕಾಮಗಾರಿ ಕೆಲವೇ ದಿನಗಳಲ್ಲಿಯೇ ಕಿತ್ತು ಹೋಗಿ ಪೂರ್ತಿ ರಸ್ತೆಗಳಲ್ಲಿ ಹೊಂಡ ಬಿದ್ದು, ಮಳೆಗಾಲದಲ್ಲಿ ಓಡಾಡಲು ಸಾಧ್ಯವಾಗದೇ ಗ್ರಾಮಸ್ಥರಿಗೆ ತುಂಬಾ ತೊಂದರೆಯಾಗಿರುವುದರಿಂದ ಕಾಮಗಾರಿ ಮಾಡಿರುವ ಗುತ್ತಿಗೆದಾರರನ್ನು ಹಾಗೂ ಇದರ ಉಸ್ತುವಾರಿ ವಹಿಸಿರುವ ಅಧಿಕಾರಿಯ ಮೇಲೆ ಸಾರ್ವಜನಿಕರು ಶಿಸ್ತಿನ ಕ್ರಮ ಕೈಗೊಳ್ಳಲು ಆಗ್ರಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಬಂದಿದೆ.<br><br>**ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲೂಕಿನ ಅಡಿಕೆಹೊಸುರ ದಿಂದ ತಟ್ಟಿಗೇರಾ ಕೂಡು ರಸ್ತೆ ಕಾಮಗಾರಿಯನ್ನು ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ಕೈಗೊಂಡಿರುವುದಿಲ್ಲ.**<br><br>ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲ್ಲೂಕಿನ ಅಡಿಕೆಹೊಸೂರ ದಿಂದ ತಟ್ಟಿಗೇರಾ ಕೂಡು ರಸ್ತೆ (2.20 ಕಿ.ಮೀ) ಮತ್ತು ಅದಕ್ಕೆ ಹೊಂದಿಕೊಂಡಿರುವ ಗೌಳಿವಾಡ ಕೂಡು ರಸ್ತೆ (1.20 ಕಿ.ಮೀ) ಸೇರಿ ಒಟ್ಟು 3.40 ಕಿ.ಮೀ ಉದ್ದದ ರಸ್ತೆ ಕಾಮಗಾರಿಯನ್ನು ಅಂದಾಜು ಮೊತ್ತ ರೂ. 303.60 ಲಕ್ಷಗಳಲ್ಲಿ ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ-4 ರಡಿ (ಪ್ಯಾಕೇಜ್ ಸಂಖ್ಯೆ: ಕೆ.ಎಸ್. 27-36) ಅನುಮೋದನೆಗೊಂಡಿರುತ್ತದೆ.<br><br>ಸದರಿ ರಸ್ತೆ ಕಾಮಗಾರಿಯನ್ನು ಶ್ರೀ. ಎಸ್.ಆರ್. ಬಂಡಿವಾಡ, ಗುತ್ತಿಗೆದಾರರವರಿಗೆ ರೂ. 277.76 ಲಕ್ಷಗಳಿಗೆ ಟೆಂಡರ್ ಮೂಲಕ ವಹಿಸಿಕೊಡಲಾಗಿದ್ದು, ಗುತ್ತಿಗೆ ಕರಾರಿನನ್ವಯ ಗುತ್ತಿಗೆದಾರರು ಕಾಮಗಾರಿಯನ್ನು **ದಿನಾಂಕ: 17-10-2017 ರಂದು ಪ್ರಾರಂಭಿಸಿ, ದಿನಾಂಕ: 16-09-2018 ರೊಳಗೆ ಪೂರ್ಣಗೊಳಿಸಬೇಕಾಗಿರುತ್ತದೆ.**<br><br>ಅಡಿಕೆಹೊಸೂರ ದಿಂದ ತಟ್ಟಿಗೇರಾ ಕೂಡು ರಸ್ತೆ ಮತ್ತು ಅದಕ್ಕೆ ಹೊಂದಿಕೊಂಡಿರುವ ಗೌಳಿವಾಡ ಕೂಡು ರಸ್ತೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಅಡಿಕೆಹೊಸೂರು ದಿಂದ ತಟ್ಟಿಗೇರೆ ಕೂಡು ರಸ್ತೆಯ ಸರಪಳಿ 0.00 ರಿಂದ 0.17 ಕಿ.ಮೀ ವರೆಗೆ ಗ್ರಾಮ ಪರಿಮಿತಿಯಲ್ಲಿದ್ದು, ಕಾಂಕ್ರೀಟಿಕರಣ ಮಾಡಲು ಅನುವು ಮಾಡಲಾಗಿರುತ್ತದೆ. ಈ ಕಾಮಗಾರಿಯನ್ನು ಇನ್ನೂ ಪ್ರಾರಂಭಿಸಿರುವುದಿಲ್ಲ.<br><br>ಸರಪಳಿ 0.17 ರಿಂದ 1.20 ಕಿ.ಮೀ ವರೆಗೆ ಡಾಂಬರೀಕರಣ ಮಾಡಲು ಯೋಜಿಸಿದ್ದು, ಈಗ ರಸ್ತೆ ರಚನೆ ಮಾಡಿ ಜಿ-2 ಖಡೀಕರಣ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |

| | | |
|---|---|---|
| | | ಸರಪಳಿ 1.20 ರಿಂದ 2.20 ಕಿ.ಮೀ ರಲ್ಲಿ ಡಾಂಬರೀಕರಣ ಕಾಮಗಾರಿ ಪೂರ್ಣಗೊಂಡಿರುತ್ತದೆ. ಲಿಂಕ್ ರಸ್ತೆಯ ಅಡಿಕೆ ಹೊಸೂರ ಗೌಳಿವಾಡ ರಸ್ತೆಯ ಸರಪಳಿ 0.00 ರಿಂದ 0.95 ಕಿ.ಮೀ ವರೆಗೆ ರಸ್ತೆ ರಚನೆ ಪೂರ್ಣಗೊಂಡಿರುತ್ತದೆ. 0.95 ರಿಂದ 1.20 ಕಿ.ಮೀ ವರೆಗೆ ಗ್ರಾಮ ಪರಿಮಿತಿಯಲ್ಲಿ ಸಿಮೆಂಟ್ ರಸ್ತೆ ನಿರ್ಮಿಸಲಾಗಿದೆ.<br><br>ಈ ರಸ್ತೆಯ ರಚನೆ ಕಾಮಗಾರಿ ಕೈಗೊಂಡಿದ್ದಾಗ ಅನಿರೀಕ್ಷಿತ ಮಳೆಯಿಂದಾಗಿ ರಸ್ತೆಯ ರಚನೆ ಕೈಗೊಂಡಿರುವ ಭಾಗದಲ್ಲಿ ರಸ್ತೆಯು ಕೆಸರಿನಿಂದ ಕೂಡಿದ್ದು, ಸಂಚಾರಕ್ಕೆ ವ್ಯತ್ಯಯ ಉಂಟಾಗಿದ್ದು, ಗುತ್ತಿಗೆದಾರರು ಸಂಚಾರ ಸುಗಮಗೊಳಿಸಲು ಖಡೀಕರಣ ಕಾಮಗಾರಿಯನ್ನು ಕೈಗೊಂಡಿರುತ್ತಾರೆ.<br><br>ಸದರಿ ರಸ್ತೆಯಲ್ಲಿ ಯಾವುದೇ ವಾಹನ ಸಂಚಾರಕ್ಕೆ ಅಡ್ಡಿಯಾಗದಂತೆ ಕ್ರಮಕೈಗೊಳ್ಳಲು ಗುತ್ತಿಗೆದಾರರಿಗೆ ಸೂಚಿಸಲಾಗಿದ್ದು, ಕಾಮಗಾರಿಯನ್ನು ನಿಗಧಿತ ಅವಧಿಯೊಳಗೆ ಪೂರ್ಣಗೊಳಿಸಲು ಕ್ರಮ ವಹಿಸಿದೆ. |
| ಆ. | ಈ ರೀತಿ ರಸ್ತೆ ಕಾಮಗಾರಿಗೆ ಬಂದಿರುವ ಅನುದಾನ ದುರ್ಬಳಕೆ ಮಾಡಿರುವುದಕ್ಕೆ ಯಾರು ಜವಬ್ದಾರರು; ಈ ಬಗ್ಗೆ ಸರ್ಕಾರ ಕೂಡಲೇ ವರದಿ ಪಡೆದು ಕಳಪೆ ಕಾಮಗಾರಿ ಮಾಡಿದರೂ ಗಮನಿಸದ ಅಧಿಕಾರಿಯ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವುದೇ? | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಕೈಗೊಳ್ಳಲಾಗುವ ರಸ್ತೆ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಾಗ ನಿಯಮಾನುಸಾರ ಮೂರು ಹಂತಗಳಲ್ಲಿ ಗುಣ ನಿಯಂತ್ರಣ ಮಾನಿಟರ್‌ಗಳಿಂದ ಪರಿವೀಕ್ಷಣೆಗೆ ಒಳಪಡಿಸಿ, ಕಾಮಗಾರಿ ಒಂದು ಹಂತದ ಗುಣಮಟ್ಟ ಖಾತರಿಯಾದ ನಂತರ ಮುಂದಿನ ಹಂತದ ಕಾಮಗಾರಿ ನಿರ್ವಹಿಸಲು ಕೈಗೊಳ್ಳಲಾಗುತ್ತಿದೆ. ಅಲ್ಲದೇ ಕಾಮಗಾರಿ ಪೂರ್ಣಗೊಂಡ ನಂತರ ಐದು ವರ್ಷಗಳ ವಾರ್ಷಿಕ ನಿರ್ವಹಣೆ ಹಾಗೂ ಆರನೇ ವರ್ಷದ ಮರು ಡಾಂಬರೀಕರಣವನ್ನು ಮೂಲ ಗುತ್ತಿಗೆದಾರರೇ ನಿರ್ವಹಿಸುವುದು ಕಡ್ಡಾಯವಾಗಿರುತ್ತದೆ. ಅನುಷ್ಠಾನ ಮತ್ತು ನಿರ್ವಹಣಾ ಅವಧಿಯಲ್ಲಿ ಕಳಪೆ ಕಾಮಗಾರಿ ಕಂಡುಬಂದಲ್ಲಿ ಸೂಕ್ತ ಕ್ರಮಕ್ಕೆ ಅವಕಾಶವಿರುತ್ತದೆ.<br><br>ಅಡಿಕೆಹೊಸುರ ದಿಂದ ತಟ್ಟಿಗೇರಾ ಕೂಡು ರಸ್ತೆ ಹಾಗೂ ಗೌಳಿವಾಡ ಸಂಪರ್ಕ ರಸ್ತೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಈ ಕಾಮಗಾರಿ ಅನುಷ್ಠಾನದಲ್ಲಿ ಅನುದಾನ ದುರ್ಬಳಕೆ ಹಾಗೂ ಕಳಪೆ ಕಾಮಗಾರಿ ಆಗಿರುವುದಿಲ್ಲ. |

ಕಡತ ಸಂಖ್ಯೆ: ಗ್ರಾಅಪ:151/2:ಆರ್‌ಆರ್‌ಸಿ:18

(ಕೃಷ್ಣ ಬೈರೇಗೌಡ)
ಗ್ರಾಮೀಣಾಭಿವೃದ್ಧಿ, ಪಂಚಾಯತ್ ರಾಜ್, ಕಾನೂನು,
ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ
ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು